# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ ಡಿಸೆಂಬರ್ ೧೫, ೨೦೧೬ (ಮಾರ್ಗಶಿರ ೨೪, ಶಕ ವರ್ಷ ೧೯೩೮)<br>Bengaluru, Thursday, December 15, 2016 (Margashira 24, Shaka Varsha 1938) | ಸಂಚಿಕೆ ೪೯<br>Issue 49 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಯನಿರ್ವಾಹಕ ಇಂಜಿನಿಯರರುಹಾಗೂ ರಾಜ್ಯ ಹೆದ್ದಾರಿ ಪ್ರಾಧಿಕಾರ ಅಧಿಕಾರಿಯವರ ಕಛೇರಿ**

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ,**

**ಶಿರಸಿ (ಉತ್ತರ ಕನ್ನಡ ಜಿಲ್ಲೆ)**

**ಕಚೇರಿ ಆದೇಶ**

**ಸಂಖ್ಯೆ: 12/2016-2017, ದಿನಾಂಕ:-03-08-2016.**

**ವಿಷಯ :** ಶ್ರೀ ಎಚ್. ಶ್ರೀನಿವಾಸ, ಸ್ವೀಪರ್, ಲೋ.ಬಂ.ಒ.ಜ.ಸಾ.ಇ. ಉಪ ವಿಭಾಗ, ಹಳಿಯಾಳ ಇವರ ಅನಧಿಕೃತ ಗೈರು ಹಾಜರಿ-ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಉಲ್ಲೇಖ :**

1) ಸ.ಕಾ.ನಿ.ಇಂ. ಲೋ.ಬಂ.ಮತ್ತು ಒ.ಜ.ಇ. ಉಪ-ವಿಭಾಗ, ಹಳಿಯಾಳ ಇವರ ಪತ್ರ ಸಂಖ್ಯೆ397/ ದಿನಾಂಕ : 6-8-2008, ಸಂ: 713/ದಿ:17-11-2008, ಸಂ: 751/ದಿ:26-11-2008, ಸಂ:825/ ದಿ : 10-12-2008, ಸಂ : 223/ದಿ:4-6-2009, ಸಂ : 1116/ ದಿ : 3-5-2011.
2) ಸ.ಕಾ.ನಿ.ಇಂ. ಲೋ.ಬಂ.ಮತ್ತು ಒ.ಜ.ಇ. ಉಪ-ವಿಭಾಗ, ಹಳಿಯಾಳ ಇವರ ಪತ್ರ ಸಂ : 838/14-15 ದಿನಾಂಕ : 13-10-2014.
3) ಈ ಕಚೇರಿ ಪತ್ರ ಸಂಖ್ಯೆ:2119/14-15 ದಿನಾಂಕ:25-10-2014.
4) ಸ.ಕಾ.ನಿ.ಇಂ. ಲೋ.ಬಂ.ಮತ್ತು ಒ.ಜ.ಇ. ಉಪ-ವಿಭಾಗ, ಹಳಿಯಾಳ ಇವರ ಪತ್ರ ಸಂಖ್ಯೆ : 695/ ದಿನಾಂಕ : 12-11-2014
5) ಸ.ಕಾ.ನಿ.ಇಂ. ಲೋ.ಬಂ.ಮತ್ತು ಒ.ಜ.ಇ. ಉಪ-ವಿಭಾಗ, ಹಳಿಯಾಳ ಇವರ ಪತ್ರ ಸಂ : 838/ ದಿನಾಂಕ : 6-12-2014.
6) ಈ ಕಚೇರಿ ಪತ್ರ ಸಂಖ್ಯೆ : 3394 ದಿನಾಂಕ : 16-01-2015.
7) ವಿಚಾರಣಾಧಿಕಾರಿಗಳು ಹಾಗೂ ಸ.ಕಾ.ನಿ.ಇಂ. ಲೋ.ಬಂ.ಮತ್ತು ಒ.ಜ.ಇ.ಉಪ-ವಿಭಾಗ, ಜೋಯಿಡಾ ಇವರ ಪತ್ರ ಸಂಖ್ಯೆ : 37/5-5-2015, ಸಂ : 81/ ದಿ : 27-5-2015., ಸಂ : 133 ದಿ :20-6-2015.
8) ವಿಚಾರಣಾಧಿಕಾರಿಗಳು ಹಾಗೂ .ಸ.ಕಾ.ನಿ.ಇಂ. ಲೋ.ಬಂ.ಮತ್ತು ಒ.ಜ.ಇ.ಉಪ-ವಿಭಾಗ, ಜೋಯಿಡಾ ಇವರ ಪತ್ರ ಸಂ : 208/15-16 ದಿನಾಂಕ:25-7-2015.
9) ವಿಚಾರಣಾಧಿಕಾರಿಗಳು ಹಾಗೂ ಸ.ಕಾ.ನಿ.ಇಂ. ಲೋ.ಬಂ.ಮತ್ತು ಒ.ಜ.ಇ.ಉಪ-ವಿಭಾಗ, ಜೋಯಿಡಾ ಇವರ ಪತ್ರ ಸಂ : 328/15-16 ದಿನಾಂಕ : 05-10-2015.
10) ಈ ಕಚೇರಿ ಪತ್ರ ಸಂಖ್ಯೆ : 2994/ ದಿನಾಂಕ : 07-11-2015.
11) ಈ ಕಚೇರಿ ಪತ್ರ ಸಂಖ್ಯೆ : 4173/15-16 ದಿನಾಂಕ : 22-01-2016.
12) ಮುಖ್ಯ ಇಂಜಿನಿಯರರು, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂ : ಸಂಕದ/ ಇತರೆ/ವಿಸಿಎ/2015-16 ದಿನಾಂಕ:18-03-2016.

13) ಮುಖ್ಯ ಇಂಜಿನಿಯರರು, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರ ಪತ್ರ ಸಂ : ಸಿಬಿಎನ್/ಸಿ–16/ಸ್ವೀಪರ್/ದಂಡನೆ/2015–16/ 348 ದಿನಾಂಕ : 22–04–2016.

14) ಅಧೀಕ್ಷಕ ಇಂಜಿನಿಯರರು, ಲೋ.ಬಂ.ಒ.ಜ.ಸಾ.ಇ. ವೃತ್ತ, ಧಾರವಾಡ ರವರ ಪತ್ರ ಸಂ:ಲೋಇಧಾವೃ/ ಸಿ–2/ಗ್ರೂಪ್–ಡಿ/ ಗೈ.ಹಾ./2016–17/807 ದಿನಾಂಕ : 23–05–2016.

**ಪ್ರಸ್ತಾವನೆ :**

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪ ವಿಭಾಗ, ಹಳಿಯಾಳ ರವರು ಅವರ ಕಚೇರಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಶ್ರೀ ಎಚ್. ಶ್ರೀನಿವಾಸ, ಸ್ವೀಪರ್ ಇವರು ದಿನಾಂಕ:03–07–2008 ರಿಂದ ಅನಧಿಕೃತ ಗೈರುಹಾಜರಾಗಿರುವುದರಿಂದ ಉಲ್ಲೇಖ(1) ಪತ್ರಗಳಲ್ಲಿ 06 ಬಾರಿ ನೌಕರರ ವಿಳಾಸಕ್ಕೆ ಕಾರಣ ಕೇಳುವ ನೋಟೀಸ್‌ಗಳನ್ನು ನೊಂದಾಯಿತ ಅಂಚೆ ಮೂಲಕ ನೀಡಿ, ಕೆ.ಸಿ.ಎಸ್.ಆರ್. ಮತ್ತು ಸಿ.ಸಿ.ಎ. ನಿಯಮಾವಳಿಗಳ ಅನ್ವಯ ಇಲಾಖಾ ವಿಚಾರಣೆ ನಡೆಸಿ ಸೇವೆಯಿಂದ ವಜಾಗೊಳಿಸುವುದಾಗಿ ಎಚ್ಚರಿಕೆ ನೀಡಲಾಗಿದ್ದರೂ ಸಹ, ಸದರೀ ನೋಟೀಸ್‌ಗಳನ್ನು ನೌಕರರು ಸ್ವೀಕರಿಸಿದ್ದು, ಯಾವುದೇ ಪ್ರತಿಕ್ರಿಯೆಯನ್ನು ನೀಡದೇ ಗೈರು ಹಾಜರಿಯಲ್ಲಿ ಇದ್ದುದರಿಂದ, ಉಲ್ಲೇಖ(2)ರ ಪತ್ರದಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರರು. ಹಳಿಯಾಳರವರು ಸದರಿ ನೌಕರರ ಮೇಲೆ, ಶಿಸ್ತು ಕ್ರಮ ಕೈಗೊಳ್ಳಲು ಪ್ರಸ್ತಾವನೆಯನ್ನು ಸಲ್ಲಿಸದ್ದರಿಂದ, ಉಲ್ಲೇಖ(3)ರ ಈ ಕಚೇರಿ ಪತ್ರದಲ್ಲಿ ಸದರಿ ನೌಕರರಿಗೆ ಕೊನೆಯ ಬಾರಿ ಅಂತಿಮ ಎಚ್ಚರಿಕೆ ಪತ್ರವನ್ನು ಜಾರಿ ಮಾಡಿ ನಂತರ ಶಿಸ್ತು ಕ್ರಮಕೈಗೊಳ್ಳಲು ಸೂಚನೆ ನೀಡಲಾಗಿತ್ತು. ಅದರಂತೆ ಉಲ್ಲೇಖ(4)ರ ಪತ್ರದಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರರು, ಹಳಿಯಾಳರವರು ನೌಕರರಿಗೆ ಅಂತಿಮ ಎಚ್ಚರಿಕೆ ಪತ್ರವನ್ನು ಜಾರಿ ಮಾಡಿ ಕಚೇರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ಸೂಚನೆ ನೀಡಿದರೂ, ಸದರಿಯವರು ನೋಟೀಸ್‌ನ್ನು ಸ್ವೀಕರಿಸಿದ್ದು, ಕಚೇರಿ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಹಾಗೂ ಸದರಿ ಪತ್ರಕ್ಕೆ ಯಾವುದೇ ಉತ್ತರ ನೀಡಿರುವುದಿಲ್ಲ. ಆದ್ದರಿಂದ, ಉಲ್ಲೇಖ(5)ರ ಪತ್ರದಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರರು ಹಳಿಯಾಳ ರವರು ಸದರಿ ನೌಕರರ ಮೇಲೆ ಶಿಸ್ತು ಕ್ರಮ ಕೈಗೊಳ್ಳಲು ಅನುಬಂಧ–1 ರಿಂದ ಅನುಬಂಧ–4ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದ್ದರಿಂದ, ಉಲ್ಲೇಖ(6)ರ ಈ ಕಚೇರಿ ಪತ್ರದಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪ ವಿಭಾಗ, ಜೋಯಿಡಾ ರವರನ್ನು ವಿಚಾರಣಾಧಿಕಾರಿ, ಹಾಗೂ ಶ್ರೀಮತಿ ಬಿ.ಎ. ನವರೇಕರ, ಪ್ರಥಮ ದರ್ಜೆ ಸಹಾಯಕರು. ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪ ವಿಭಾಗ, ಹಳಿಯಾಳ ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು. ಅದರಂತೆ ವಿಚಾರಣಾಧಿಕಾರಿಗಳು ಹಾಗೂ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪ ವಿಭಾಗ, ಜೋಯಿಡಾ ರವರು ಉಲ್ಲೇಖ(7)ರ ಪತ್ರಗಳಲ್ಲಿ ಮೂರು ಬಾರಿ ಇಲಾಖಾ ವಿಚಾರಣೆಗೆ ದಿನಾಂಕವನ್ನು ನಿಗಧಿಪಡಿಸಿ, ಶ್ರೀ ಎಚ್. ಶ್ರೀನಿವಾಸ್, ಸ್ವೀಪರ್ ಇವರಿಗೆ ನೋಟೀಸ್‌ನ್ನು ಜಾರಿಗೊಳಿಸಿ ಸದರೀ ನೌಕರರ ವಿರುದ್ದ ಆರೋಪ ಪಟ್ಟಿಯನ್ನು ತಯಾರಿಸಿ, ನೌಕರರಿಗೆ ನೀಡಿ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಹಾಗೂ ವೈಯಕ್ತಿಕವಾಗಿ ಹಾಜರಾಗಿ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು, ಆದರೇ ನೌಕರರು ಸದರಿ ನೋಟೀಸ್‌ಗಳನ್ನು ಸ್ವೀಕರಿಸಿದ್ದು, ಇಲಾಖಾ ವಿಚಾರಣೆಗೆ ಹಾಜರಾಗಿರುವುದಿಲ್ಲ ಹಾಗೂ ಯಾವುದೇ ಲಿಖಿತ ಹೇಳಿಕೆಯನ್ನು ನೀಡಿರುವುದಿಲ್ಲ.

ಆದ್ದರಿಂದ ವಿಚಾರಣಾಧಿಕಾರಿಗಳು ಹಾಗೂ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರರು, ಜೋಯಿಡಾ ರವರು ಉಲ್ಲೇಖ(8) ಮತ್ತು (9)ರ ಪತ್ರಗಳಲ್ಲಿ ಸದರೀ ನೌಕರರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಆಸಕ್ತಿ ಇಲ್ಲದೇ ಇರುವುದು ಕಂಡುಬಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ ಅನ್ವಯ ಏಕಪಕ್ಷೀಯ ನಿರ್ಣಯ ತೆಗೆದುಕೊಳ್ಳುವುದು ಅನಿವಾರ್ಯ ಎಂದು ಭಾವಿಸಿ, ಸದರೀ ಗೈರು ಹಾಜರಾಗಿರುವ ನೌಕರರನ್ನು ಸರ್ಕಾರಿ ಸೇವೆಯಿಂದ ಕೈಬಿಡಬಹುದಾಗಿ ವರದಿ ಸಲ್ಲಿಸಿರುತ್ತಾರೆ.

ಆದ್ದರಿಂದ, ಉಲ್ಲೇಖ(10)ರ ಈ ಕಚೇರಿ ಪತ್ರದಲ್ಲಿ ಸದರಿ ನೌಕರರಿಗೆ ವಿಚಾರಣಾಧಿಕಾರಿಗಳು ಹಾಗೂ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರರು, ಜೋಯಿಡಾ ರವರ ಶಿಫಾರಸ್ಸಿನ ಬಗ್ಗೆ ಮಾಹಿತಿ ನೀಡಿ, ಈ ಬಗ್ಗೆ ಅವರ ಹೇಳಿಕೆಯನ್ನು ಸಲ್ಲಿಸುವಂತೆ ಸೂಚನೆ ನೀಡಲಾಗಿರುತ್ತದೆ. ಆದರೇ, ಸದರಿಯವರು ಪತ್ರವನ್ನು ಸ್ವೀಕರಿಸಿದ್ದು, ಯಾವುದೇ ಹೇಳಿಕೆಯನ್ನು ಈ ಕಚೇರಿಗೆ ಸಲ್ಲಿಸಿರುವುದಿಲ್ಲ ಹಾಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಆದ್ದರಿಂದ, ಉಲ್ಲೇಖ(11)ರ ಈ ಕಚೇರಿ ಪತ್ರದಲ್ಲಿ ಶ್ರೀ ಎಚ್. ಶ್ರೀನಿವಾಸ, ಸ್ವೀಪರ್ ಇವರ ಮೇಲೆ ಇಲಾಖಾ ವಿಚಾರಣೆ ವರದಿಯಂತೆ ಶಿಸ್ತುಕ್ರಮ ಜರುಗಿಸುವ ಸಂಬಂಧ ಅನುಮತಿ ಕೋರಿ ಮೇಲಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಲಾಗಿ, ಉಲ್ಲೇಖ(12).(13) ಮತ್ತು (14)ರ ಪತ್ರಗಳಲ್ಲಿ ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ ನಿಯಂತ್ರಣ ಮತ್ತು ಅಪೀಲು (ಸಿ.ಸಿ.ಎ.) ನಿಯಮ 1957 ಅನುಸೂಚಿ (iii) ರ ಅನ್ವಯ ಕ್ರಮ ಕೈಗೊಳ್ಳುವಂತೆ ಸೂಚನೆ ನೀಡಲಾಗಿರುತ್ತದೆ.

ಆದ್ದರಿಂದ ಮೇಲೆ ವಿವರಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ, ಶ್ರೀ ಎಚ್. ಶ್ರೀನಿವಾಸ, ಸ್ವೀಪರ್ ಇವರನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 1957ರ ನಿಯಮ 8 (ತು)ರಂತೆ ಹಾಗೂ ಸರ್ಕಾರದ ಸುತ್ತೋಲೆ ಸಂ.ಸಿ.ಆಸು/18ಸೇಇವಿ/2001 ದಿನಾಂಕ:14–09–2001ರ ಪ್ರಕಾರ ದಿನಾಂಕ:03–07–2008ರಿಂದ ಅನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣದ ಹಿನ್ನಲೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 1957ರ ನಿಯಮ 8 (vii)ರಂತೆ ರಂತೆ ಹಾಗೂ ಸರ್ಕಾರದ ಸುತ್ತೋಲೆ ಸಂ.ಸಿ.ಆಸು/18ಸೇಇವಿ/2001 ದಿನಾಂಕ:14–09–2001ರ ಪ್ರಕಾರ ಪ್ರದತ್ತವಾದ ಅಧಿಕಾರದ ಮೇರೆಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

ಉಪ ವಿಭಾಗ, ಹಳಿಯಾಳ ಕಚೇರಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದ (ಅನಧೀಕೃತ ಗೈರು ಹಾಜರಿಯಲ್ಲಿರುವ) **ಶ್ರೀ ಎಚ್. ಶ್ರೀನಿವಾಸ, ಸ್ವೀಪರ್** ಇವರನ್ನು ದಿನಾಂಕ : 03–07–2008 ರಿಂದ ಜಾರಿಗೆ ಬರುವಂತೆ ಮತ್ತೆ ಸರ್ಕಾರಿ ನೌಕರಿಯ ಪ್ರವೇಶಕ್ಕೆ ಅನರ್ಹತೆಯಾಗದ ಹಾಗೆ ಸರ್ಕಾರಿ **"ಸೇವೆಯಿಂದ ವಜಾ"** ಮಾಡಲಾಗಿದೆ.

**P.R. 799**
**SC - 1**

**ಎಸ್.ಎಲ್. ಸತ್ಯನಾರಾಯಣ**
ಕಾರ್ಯನಿರ್ವಾಹಕ ಇಂಜಿನಿಯರರು
ಹಾಗೂ ರಾಜ್ಯ ಹೆದ್ದಾರಿ ಪ್ರಾಧಿಕಾರ ಅಧಿಕಾರಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ,
ಶಿರಸಿ (ಉತ್ತರ ಕನ್ನಡ ಜಿಲ್ಲೆ).

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

### ತಿದ್ದುಪಡಿ ಅಧಿಸೂಚನೆ

**ನಂ.ಮಭೂ.ಅಧಿಸೂಚನೆ. DVGDCTECH(1) RS-10/15-16, ದಿನಾಂಕ: 19/10/2016**

ಈ ಪ್ರಾಧಿಕಾರದ ಅಧಿಸೂಚನೆ ಸಂಖ್ಯೆ **DVGDCTECH(1) RS-10/15-16** ದಿ:26/04/2016ರ ಗ್ರಾಮದ ಅನುಸೂಚಿ ಕೋಷ್ಟಕವನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿ ಓದಿಕೊಳ್ಳುವುದು ಉಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

**ಗ್ರಾಮದ ತಿದ್ದುಪಡಿ ಅಧಿಸೂಚಿ**

| ಕ್ರಮ ಸಂಖ್ಯೆ | ಜಿಲ್ಲೆ | ತಾಲ್ಲೂಕು | ಹೋಬಳಿ | ಗ್ರಾಮದ ಹೆಸರು |
|---|---|---|---|---|
| 1 | ದಾವಣಗೆರೆ | ಜಗಳೂರು | ಬಿಳಿಚೋಡು | ಹಳವದಂಡಿ |

ಜಿಲ್ಲಾಧಿಕಾರಿಗಳು,
ದಾವಣಗೆರೆ.

**P.R. 813**

## ಕಂದಾಯ ಇಲಾಖೆ

## ಜಿಲ್ಲಾಧಿಕಾರಿಗಳವರ ಕಾರ್ಯಾಲಯ, ಬೆಂಗಳೂರು ನಗರ ಜಿಲ್ಲೆ

### ಅಧಿಸೂಚನೆ

**ನಂ.ಸಿಬ್ಬಂದಿ(1)/ಸಿಆರ್/72/2016–17, ಬೆಂಗಳೂರು, ದಿನಾಂಕ: 05–10–2016**

**ವಿಷಯ :** ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013ರಡಿಯಲ್ಲಿ ಕಂದಾಯ ಇಲಾಖೆ, ಬೆಂಗಳೂರು ವಿಭಾಗದಲ್ಲಿನ 'ಸಿ' ವೃಂದದ ಪ್ರದಸ/ಪ್ರದರಾನಿ, ದ್ವಿತೀಯ ದರ್ಜೆ ಸಹಾಯಕರು, ಗ್ರಾಮಲೆಕ್ಕಿಗರು, ಬೆರಳಚ್ಚುಗಾರರು, ವಾಹನಚಾಲಕರು ಮತ್ತು ಡಿ.ದರ್ಜೆ ನೌಕರರ ಹುದ್ದೆಗಳಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದವರಿಗಾಗಿ ಶೇಕಡ 8% ರಷ್ಟು ಹುದ್ದೆಗಳನ್ನು ಗುರುತಿಸುವ ಕುರಿತು.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 6 ಪಿಎಲ್ಎಕ್ಸ್ 2012, ದಿನಾಂಕ:06-11-2013.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 43 ಹೆಚ್‌ಕೆಸಿ 2013, ದಿನಾಂಕ:29–01–2014 (ಅಧಿಸೂಚನೆ–I & II)
3. ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ 78 ಹೈಕಕೋ 2014 ದಿನಾಂಕ: 22–05–2015
4. ಈ ಕಛೇರಿಯ ಸಮ ಸಂಖ್ಯೆ ಕರಡು ಅಧಿಸೂಚನೆ ದಿನಾಂಕ: 16–08–2016
5. ಈ ಕಛೇರಿಯ ಸಮ ಸಂಖ್ಯೆ ಪತ್ರ ದಿನಾಂಕ: 16–08–2016
6. ಸರ್ಕಾರದ ಪತ್ರ ಸಂ.ಕಂಇ 119 ಬಿಎಸ್ಐ 2016 ದಿನಾಂಕ 4–10–2016

ಭಾರತೀಯ ಸಂವಿಧಾನದ ಅನುಚ್ಛೇದ 371(ಜೆ) ಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಉಲ್ಲೇಖ (1) ರ ಅಧಿಸೂಚನೆ ಅನ್ವಯ ಹೊರಡಿಸಿರುವ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013 ರ ಕಂಡಿಕೆ 13 ರನ್ವಯ ಬೆಂಗಳೂರು ನಗರ ಜಿಲ್ಲೆ ಕಂದಾಯ ಘಟಕವು ರಾಜ್ಯ ಮಟ್ಟದ ಕಛೇರಿಯೆಂದು ಗುರುತಿಸಲಾಗಿದೆ.

ಉಲ್ಲೇಖ (3) ರ ಸುತ್ತೋಲೆಯಲ್ಲಿ ರಾಜ್ಯ ಮಟ್ಟದ ಕಛೇರಿ ಅಥವಾ ಸಂಸ್ಥೆ ಅಂದರೆ "ಸಾರ್ವಜನಿಕ ಉದ್ಯೋಗ ಆದೇಶದ ಕಂಡಿಕೆ 2(1) (ಐ) ಅರ್ಥ ವಿವರಣೆಯಂತೆ ರಾಜ್ಯಕ್ಕೆ ಸಮಗ್ರವಾಗಿ ಸೇವೆ ಸಲ್ಲಿಸುತ್ತಿರುವ ಅಥವಾ ರಾಜ್ಯದ ಸಮಗ್ರ ವಿಸ್ತಾರದ ಅಧಿಕಾರ ವ್ಯಾಪ್ತಿಯ ಅಥವಾ ರಾಜ್ಯ ರಾಜಧಾನಿ ಪ್ರದೇಶಕ್ಕೆ ಸೇವೆ ಸಲ್ಲಿಸುತ್ತಿರುವ ಕಛೇರಿಗಳನ್ನು ರಾಜ್ಯ ಮಟ್ಟದ ಕಛೇರಿ / ಸಂಸ್ಥೆಯೆಂದು ವರ್ಗೀಕರಿಸಬೇಕಾಗಿರುವ ಹಿನ್ನೆಲೆಯಲ್ಲಿ ರಾಜ್ಯದ ರಾಜಧಾನಿ ಪ್ರದೇಶದ ವಿಸ್ತಾರಕ್ಕೆ ಸಂಬಂಧಿಸಿದಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುವಂತಹ ಕಛೇರಿಗಳಲ್ಲಿ ಶೇ.8 ರಂತೆ ರಾಜ್ಯ ಮಟ್ಟದ ಮೀಸಲಾತಿ ನೀಡುವಂತೆ ಸ್ಪಷ್ಟೀಕರಿಸಲಾಗಿದೆ" ಎಂದು ತಿಳಿಸಲಾಗಿರುತ್ತದೆ.

ಆದ್ದರಿಂದ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಕಂದಾಯ ಘಟಕಕ್ಕೆ ಸಂಬಂಧಿಸಿದಂತೆ ರಾಜ್ಯದ ರಾಜಧಾನಿ ಪ್ರದೇಶಕ್ಕೆ ಸೇವೆ ಸಲ್ಲಿಸುತ್ತಿರುವ ಪ್ರದಸ/ಪ್ರದರಾನಿ ಒಟ್ಟು ಮಂಜೂರಾದ ಹುದ್ದೆಗಳು 175 ಅದರಲ್ಲಿ ಬಿಬಿಎಂಪಿ ವ್ಯಾಪ್ತಿಯ ವೃಂದ ಬಲ 142, ದ್ವಿದಸ ಒಟ್ಟು ಮಂಜೂರಾದ ಹುದ್ದೆಗಳು 87 ಬಿಬಿಎಂಪಿ ವ್ಯಾಪ್ತಿಯ ವೃಂದ 69, ಗ್ರಾಮಲೆಕ್ಕಿಗರು ಒಟ್ಟು ಮಂಜೂರಾದ ಹುದ್ದೆಗಳು 251 ಅದರಲ್ಲಿ ಬಿಬಿಎಂಪಿ ವ್ಯಾಪ್ತಿಯ ವೃಂದ ಬಲ 115, ಬೆರಳಚ್ಚುಗಾರರು ಒಟ್ಟು ಮಂಜೂರಾದ ಹುದ್ದೆಗಳು 35 ಅದರಲ್ಲಿ ಬಿಬಿಎಂಪಿ ವ್ಯಾಪ್ತಿಯ ವೃಂದ ಬಲ 32, ವಾಹನ ಚಾಲಕರು ಒಟ್ಟು ಮಂಜೂರಾದ ಹುದ್ದೆಗಳು 18 ಅದರಲ್ಲಿ ಬಿಬಿಎಂಪಿ ವ್ಯಾಪ್ತಿಯ ವೃಂದ ಬಲ 18 ಮತ್ತು ಗ್ರೂಪ್ ಡಿ ನೌಕರರು ಒಟ್ಟು ಮಂಜೂರಾದ ಹುದ್ದೆಗಳು 117 ಅದರಲ್ಲಿ ಬಿಬಿಎಂಪಿ ವ್ಯಾಪ್ತಿಯ ವೃಂದ ಬಲ 105 ಸೇವೆಯಲ್ಲಿನ ಹುದ್ದೆಗಳಲ್ಲಿ ವೃಂದಗಳ ವಾರು ಹೈದ್ರಾಬಾದ್ – ಕರ್ನಾಟಕ ಪ್ರದೇಶ ವ್ಯಾಪ್ತಿ ಸ್ಥಳೀಯ ವ್ಯಕ್ತಿಗಳಿಗೆ ಮುಂಬಡ್ತಿ ಹಾಗೂ ನೇರನೇಮಕಾತಿಗಾಗಿ ಶೇಕಡ 8% ರಷ್ಟು ಹುದ್ದೆಗಳನ್ನು ಉಲ್ಲೇಖ(4)ರಂತೆ ಅನುಸೂಚಿಯಲ್ಲಿರುವಂತೆ ಮೀಸಲಿರಿಸಿ ಕರಡು ಅಧಿಸೂಚನೆಯನ್ನು

ತಯಾರಿಸಿ, ಸದರಿ ಕರಡು ಅಧಿಸೂಚನೆಯನ್ನು ಉಲ್ಲೇಖ(5)ರಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ರವರಿಗೆ ಸಲ್ಲಿಸಿ ಕರಡು ಅಧಿಸೂಚನೆಯನ್ನು ಸರ್ಕಾರದ ಕಂದಾಯ ಇಲಾಖೆಯ ಅನುಮೋದನೆಯೊಂದಿಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನುಮೋದನೆ ಪಡೆದು ಆದೇಶ ನೀಡಲು ಕೋರಲಾಗಿತ್ತು. ಉಲ್ಲೇಖ(6)ರ ಸರ್ಕಾರದ ಪತ್ರದಲ್ಲಿ ಕೆಳಕಂಡಂತೆ ತಿಳಿಸಲಾಗಿದೆ.

**ವಿಷಯ :** ಬೆಂಗಳೂರು ನಗರ ಜಿಲ್ಲೆಯ ಕಂದಾಯ ಇಲಾಖೆಯ ಕಛೇರಿಗಳಲ್ಲಿ ಸಂವಿಧಾನ ಅನುಚ್ಛೇದ 371 (ಜೆ) ರನ್ವಯ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಸ್ಥಳೀಯ ವ್ಯಕ್ತಿಗಳಿಗೆ ಹುದ್ದೆಗಳನ್ನು ಮೀಸಲಿರಿಸಿ, ಸ್ಥಳೀಯ ವೃಂದ ರಚಿಸುವ ಬಗ್ಗೆ.

**ಉಲ್ಲೇಖ :** 1. ನಿಮ್ಮ ಪತ್ರ ಸಂಖ್ಯೆ: ಸಿಬ್ಬಂದಿ (1) ಸಿಆರ್ 72 /2016–17 ದಿನಾಂಕ 16–8–2016

2. ಕರಡು ಅಧಿಸೂಚನೆ ಸಂಖ್ಯೆ: ಸಿಬ್ಬಂದಿ (1) ಸಿಆರ್ 72 /2016–17 ದಿನಾಂಕ 16–8–2016

"ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖ (1) ರ ಪತ್ರದೊಂದಿಗೆ ಲಗತ್ತಿಸಿರುವ ಉಲ್ಲೇಖ (2)ರ ದಿನಾಂಕ 16–8–2016 ರ ಕರಡು ಅಧಿಸೂಚನೆಯನ್ನು ವಿವರವಾಗಿ ಪರಿಶೀಲಿಸಲಾಗಿ ವಿವಿಧ ಹುದ್ದೆಗಳ ಎದುರು ನಿಗಧಿಪಡಿಸಿರುವ ಮೀಸಲಾತಿಯು ಕ್ರಮಬದ್ಧವಾಗಿರುವ ಹಿನ್ನೆಲೆಯಲ್ಲಿ ಅಧಿಸೂಚನೆಯನ್ನು ಹೊರಡಿಸುವಂತೆ ತಿಳಿಸಲು ನಿರ್ದೇಶಿತನಾಗಿದ್ದೇನೆ."

ಅದರಂತೆ ಈ ಕೆಳಕಂಡಂತೆ ಮೀಸಲಿರಿಸಿ ಅನುಸೂಚಿಯಲ್ಲಿರುವಂತೆ ಈ ಮೂಲಕ ಅಧಿಸೂಚಿಸಲಾಗಿದೆ.

**ಅನುಸೂಚಿ**

| ಕ್ರ ಸಂ | ವೃಂದ | ಹುದ್ದೆ | ವೇತನ ಶ್ರೇಣಿ (ರೂ.ಗಳಲ್ಲಿ) | ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಮಂಜೂರಾದ ಹುದ್ದೆಗಳು | | | | ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಶೇ.8% ರಂತೆ ಮೀಸಲಿಸಿರುವ ಹುದ್ಧೆಗಳು | | | ಉಳಿದ ಮೂಲ ವೃಂದ |
|---|---|---|---|---|---|---|---|---|---|---|---|
| | | | | ಜಿಲ್ಲಾ ವೃಂದ ಬಲ | ಬಿ.ಬಿ.ಎಂ.ಪಿ ವ್ಯಾಪ್ತಿಯ ವೃಂದ ಬಲ | ನೇರ ನೇಮ ಕಾತಿ | ಮುಂಬಡ್ತಿ | ನೇರ ನೇಮ ಕಾತಿ | ಮುಂಬಡ್ತಿ | ಒಟ್ಟು (8%) | |
| **1** | **2** | **3** | **4** | **5** | **6** | **7** | **8** | **9** | **10** | **11** | **12** |
| 1 | ಗ್ರೂಪ್–ಸಿ | ಪ್ರ.ದ.ಸ/ ಪ್ರ.ದ.ರಾ.ನಿ | 14,550–26,700 | 175 | 142 | (30%) 43 | (70%) 99 | 4 | 8 | 12 | 163 |
| 2 | ಗ್ರೂಪ್–ಸಿ | ದ್ವಿ.ದ.ಸ | 11,600–21,000 | 87 | 69 | (90%) 62 | (10%) 7 | 5 | 1 | 6 | 81 |
| 3 | ಗ್ರೂಪ್–ಸಿ | ಗ್ರಾ.ಲೆ | 11,600–21,000 | 251 | 115 | (90%) 104 | (10%) 11 | 9 | 1 | 10 | 241 |
| 4 | ಗ್ರೂಪ್–ಸಿ | ಬೆರಳಚ್ಚುಗಾರರು | 11,600–21,000 | 35 | 32 | (100%) 32 | – | 3 | – | 3 | 32 |
| 5 | ಗ್ರೂಪ್–ಸಿ | ವಾಹನ ಚಾಲಕರು | 11,600–21,000 | 18 | 18 | (100%) 18 | – | 2 | – | 2 | 16 |
| 6 | ಗ್ರೂಪ್ "ಡಿ" | ಗ್ರೂಪ್ "ಡಿ" ನೌಕರರು | 9,600–14,550 | 117 | 105 | (100%) 105 | – | 9 | – | 9 | 108 |
| ಒಟ್ಟು | | | | **683** | **481** | **364** | **118** | **32** | **10** | **42** | **641** |

**P.R. 815**
**SC - 150**

**ವಿ.ಶಂಕರ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## IN THE COURT OF ACJM BENGALURU CITY, BENGALURU RURAL DISTRICT

## Date: 28-10-2016

It hereby notified to the public that the Kadugodi Police Station Bengaluru city have seized the following vehicles as unclaimed and such vehicles are lying in the Kadugodi police station as unclaimed so far. Hence the Owners of the Properties (Vehicles) may put their claim one month from the date of publication.

| SL. NO | NCR NO | P.F NO | VEHICLE | REG NO | CHASIS NO | ENGINE NO |
|---|---|---|---|---|---|---|
| 1 | **NCR No 01/15** | **PF No 01/15** Item No-1 | TVS XL SUPER HEAVY DUTY | KA-53-E-2812 | MD621BD1X52N514 | OD1N51541648 |
| 2 | | Item No-2 | TVS MAX 100 R | KA-09-Y-2747 | 9202F161864 | 9202M217524 |
| 3 | | Item No-3 | HERO HONDA GLAMOUR | KA-07-L-7568 | 07AAWC20024 | 07AASM20516 |
| 4 | | Item No-5 | TVS XL SUPER HEAVY DUTY | KA-41 K -1584 | MD621BD1181B63763 | 0D1B81358653 |
| 5 | | Item No-6 | SCOOTY PEPT | KA-53-V-8407 | MD626BG35B2F24640 | 00JFB2503691 |
| 6 | **NCR NO 03/15** | **PF NO. 02/15** Item No-2 | BAJAJ DISCOVER | KA-03-HD-8783 | MD2DSJN22RCF33991 | JNGBRF66947 |
| 7 | | Item No-4 | SCOOTY STREEK | KA-01 EL-8125 | MD626DG3283P00500 | - |
| 8 | **NCR NO 05/15** | **PF No 04/15** Item No-2 | SUZUKI SAMURAI | KA-02S-2599 | 7607F673752 | 7607M718957 |
| 9 | | Item No-3 | BAJAJ PLATINA | TN-70-K-310 | MD2A18AZ4CWD04833 | DZZWCD82291 |
| 10 | | Item No-5 | TVS XL | KA-53-K-1027 | MD621BD1172N03371 | ODIN71271389 |
| 11 | | Item No-6 | TVS XL SUPER HEAVY DUTY MOPED | KA-41-U-9910 | MD621BD19C2A55331 | OD1AC1761679 |
| 12 | **NCR NO 07/15** | **PF NO 05/15** Item No-4 | YAMAHA LIBERO | KA-09-ED-3758 | 04C5TS43D992 | 5TS3130925TS313092 |
| 13 | | Item no-5 | KINETIC ZING | KA-03 EL-5580 | NO chasis Num | NO engine num |
| 14 | **NCR NO 09/15** | **PF NO 06/15** | CHETAK ELETRONIC | KA-06-J-3653 | Tampered | 35M96E158924 |
| 15 | **NCR NO 13/15** | **PF No 08/15** Item No-2 | HERO HONDA CD | KA-03-H7526 | - | 910E549879 |
| 16 | | Item No-3 | AUTO RICKSHAW | KA-02 B-153 | Tampered | 24MBEK8T963 |
| 17 | | Item No-4 | AUTO RICKSHA..W | KA-05AA-4770 | MD2A A24ZZNWM42039 | AEMBNM61213 |

**P.R. 823**
**SC - 1**

**Additional Chief Judicial Magistrate**
Bengaluru Rural and Bengaluru City.

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ನಡವಳಿಗಳು, ಬೆಂಗಳೂರು.

**ವಿಷಯ:** 2014ರ ಸಾಲಿನಲ್ಲಿ ನೇಮಕಾತಿ ಹೊಂದಿದ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರುಗಳ ಜನ್ಮ ದಿನಾಂಕ ಅಂಗೀಕಾರ, ಕನ್ನಡ ಭಾಷಾ ಪರೀಕ್ಷೆಯ ವಿನಾಯಿತಿ ಹಾಗೂ ಪರಿವೀಕ್ಷಣಾ ಅವಧಿ ಘೋಷಿಸುವ ಬಗ್ಗೆ.

**ಓದಲಾಗಿದೆ:**

1. ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಆಯ್ಕೆ ಸಮಿತಿ ಅಧಿಸೂಚನೆ ಸಂಖ್ಯೆ: ಡಿಪಿಎನ್:ಸಸಅ:ಆರ್‌ಸಿ:01:2011–12, ಬೆಂಗಳೂರು, ದಿನಾಂಕ: 22.02.2014.
2. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ಆದೇಶ ಸಂಖ್ಯೆ: ಡಿಪಿಎನ್:ಸಿಶಾ:1ಎ: 15:2014–15, ದಿನಾಂಕ: 17.06.2014.
3. ಮಂಗಳೂರು ವಿಭಾಗದ ಸಂಬಂಧಪಟ್ಟ ಸಹಾಯಕ ಸರ್ಕಾರಿ ಅಭಿಯೋಜಕರ ಮನವಿಗಳು.

**ಪ್ರಸ್ತಾವನೆ:**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಖಾಲಿ ಇದ್ದ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳಿಗೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗಿದೆ. ಸದರಿ ಆಯ್ಕೆಯಾದ ಅಭ್ಯರ್ಥಿಗಳಿಗೆ (2)ರಲ್ಲಿ ಓದಲಾದ ಆದೇಶದಲ್ಲಿ ನೇಮಕಾತಿ ಆದೇಶವನ್ನು ಹೊರಡಿಸಲಾಗಿದೆ. ಮಂಗಳೂರು ವಿಭಾಗದ ಸಂಬಂಧಪಟ್ಟ ಸಹಾಯಕ ಸರ್ಕಾರಿ ಅಭಿಯೋಜಕರುಗಳು ಮೇಲಾಧಿಕಾರಿಗಳ ಮುಖಾಂತರ ಸಲ್ಲಿಸಿರುವ ಉಲ್ಲೇಖ (3)ರ ಮನವಿಗಳಲ್ಲಿ ಅವರು ನೇಮಕಾತಿ ಆದೇಶದಲ್ಲಿ ಸೂಚಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರುವುದಾಗಿ ಹಾಗೂ ನೇಮಕಾತಿ ಆದೇಶದಲ್ಲಿ ವಿಧಿಸಿದ ಎಲ್ಲಾ ಷರತ್ತುಗಳನ್ನು ಪಾಲಿಸಿ, 02 ವರ್ಷಗಳ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುವುದಾಗಿ ಹಾಗೂ ಅವರುಗಳು ಎಸ್.ಎಸ್.ಎಲ್.ಸಿ.ಯಲ್ಲಿ ಕನ್ನಡ ಭಾಷೆಯಲ್ಲಿ ಉತ್ತೀರ್ಣರಾಗಿರುವುದರಿಂದ, ಕನ್ನಡ ಭಾಷಾ ಪರೀಕ್ಷೆಯಲ್ಲಿ

ಉತ್ತೀರ್ಣರಾಗುವುದರಿಂದ ವಿನಾಯಿತಿ ನೀಡಲು ಹಾಗೂ ಪರಿವೀಕ್ಷಣಾ ಅವಧಿಯನ್ನು ಘೋಷಿಸಬೇಕಾಗಿ ಕೋರಿರುತ್ತಾರೆ ಮತ್ತು ಅವರುಗಳ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳಲು ಕೋರಿರುತ್ತಾರೆ. ಸಂಬಂಧಪಟ್ಟ ಅಧಿಕಾರಿಗಳು ಅವರ ಹುದ್ದೆಗೆ ನಿಗಧಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣತೆ ಹೊಂದಿರುತ್ತಾರೆ. ಸದರಿ ಅಧಿಕಾರಿಗಳ 2014–15 ಮತ್ತು 2015–16ರ ಸಾಲುಗಳ ವಾರ್ಷಿಕ ಕಾರ್ಯ ನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ, ಅವರುಗಳ ವಿರುದ್ಧ ಯಾವುದೇ ಇಲಾಖಾ ವಿಚಾರಣೆ / ಕ್ರಿಮಿನಲ್ ಪ್ರಕರಣಗಳು ದಾಖಲಾಗಿರುವುದಿಲ್ಲ. ಸದರಿ ಅಧಿಕಾರಿಗಳು ಯಾವುದೇ ವೇತನ ರಹಿತ ರಜೆ / ಅಸಾಧಾರಣಾ ರಜೆಯನ್ನು ಪಡೆದಿರುವುದಿಲ್ಲ, ಆದ್ದರಿಂದ, ಮಂಗಳೂರು ವಿಭಾಗದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ, ಕನ್ನಡ ಭಾಷಾ ಪರೀಕ್ಷೆಯಲ್ಲಿ ವಿನಾಯಿತಿಯನ್ನು ನೀಡುವ ಬಗ್ಗೆ ಹಾಗೂ ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಸಂಬಂಧ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ : ಡಿಪಿಎನ್ : ಸಿಶಾ–1ಎ : 09 :2016–17, ಬೆಂಗಳೂರು, ದಿನಾಂಕ : 04ನೇ ನವೆಂಬರ್ 2016.**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯ ಆದೇಶ ಸಂಖ್ಯೆ: ಡಿಪಿಎನ್: ಸಿಶಾ:1ಎ:15:2014–15, ದಿನಾಂಕ: 17.06.2014ರ ಅನ್ವಯ ನೇಮಕಾತಿ ಹೊಂದಿದ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಯ ₹. 22800–600–24600–700–28800–800–33600–900–39000–1050–43200ರ ವೇತನ ಶ್ರೇಣಿಯ ಈ ಕೆಳಕಂಡ ಅಂಕಣ (2)ರಲ್ಲಿ ನಮೂದಿಸಿದ ಅಧಿಕಾರಿಗಳಿಗೆ ಕರ್ನಾಟಕ ಸರ್ಕಾರಿ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆ) ನಿಯಮಗಳು 1974ರ ನಿಯಮ 5ರ ಅನ್ವಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದರಿಂದ ವಿನಾಯಿತಿಯನ್ನು ನೀಡಲಾಗಿದೆ. **ಆದ್ದರಿಂದ, ಸರ್ಕಾರದ ಆದೇಶಗಳನ್ವಯ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವ ಷರತ್ತಿಗೆ ಒಳಪಟ್ಟು ಈ ಕೆಳಗೆ ನಮೂದಿಸಿದ ಅಧಿಕಾರಿಗಳ ಹೆಸರಿನ ಮುಂದಿನ ಅಂಕಣ (6)ರಲ್ಲಿ ನಮೂದಿಸಿದ ದಿನಾಂಕದಂದು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಪ್ರಕಾರ ಘೋಷಿಸಲಾಗಿದೆ ಹಾಗೂ ಅಂಕಣ (2)ರಲ್ಲಿ ನಮೂದಿಸಿದ ಅಧಿಕಾರಿಗಳಿಗೆ ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ. ಮೂಲ ಅಂಕಪಟ್ಟಿಗಳನ್ನು ಪರಿಶೀಲಿಸಿ, ಕರ್ನಾಟಕ ಸರ್ಕಾರಿ ನೌಕರರ (ವಯೋ ನಿರ್ಧಾರ) ಕಾಯಿದೆ 1974ರ ಕಲಂ 3ರ ಉಪ ಕಲಂ(2)ರ ಅನ್ವಯ ಅಂಕಣ (2)ರಲ್ಲಿ ನಮೂದಿಸಿದ ಅಧಿಕಾರಿಗಳ ಜನ್ಮ ದಿನಾಂಕವನ್ನು ಅಂಕಣ (4)ರಲ್ಲಿ ನಮೂದಿಸಿದಂತೆ ಒಪ್ಪಿಕೊಳ್ಳಲಾಗಿರುತ್ತದೆ.**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಒಪ್ಪಿಕೊಳ್ಳಲಾದ ಜನ್ಮ ದಿನಾಂಕ | ಕರ್ತವ್ಯಕ್ಕೆ ವರದಿ ಮಾಡಿ ಕೊಂಡ ದಿನಾಂಕ | ಪರಿವೀಕ್ಷಣಾ ಅವಧಿ ತೃಪ್ತಿಕರವೆಂದು ಘೋಷಿಸಲಾದ ದಿನಾಂಕ |
|---|---|---|---|---|---|
| 01 | 02 | 03 | 04 | 05 | 06 |
| 1. | ಬಿ.ಎಂ. ಹರೀಶ್‌ಕುಮಾರ್ | ಸಹಾಯಕ ಸರ್ಕಾರಿ ಅಭಿಯೋಜಕರು, ಹೆಚ್ಚುವರಿ ಸಿ.ಜೆ (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕಡೂರು. | 08.06.1977 | 23.06.2014 | 23.06.2016 |
| 2. | ಸುನೀಲ್ ಪಾಟೀಲ್ | ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೂಡಿಗೆರೆ. | 20.07.1976 | 25.06.2014 | 25.06.2016 |

**ಪಿ.ಕೆ. ಮಲಪುರೆ**
ನಿರ್ದೇಶಕರು,
ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು.

**P.R. 827**

## GOVERNMENT OF INDIA
### MINISTRY OF LABOUR
### LABOUR BUREAU
**NO. 112/1 (KTK) /2016 CPI Dated: 2nd Sep, 2016**

**Consumer Price Index Numbers for Industrial Workers (Base : 2001=100)**

**MONTH : JULY 2016,**

| Group/Sub-Group/Centre | BELAGAVI | BENGALURU | HUBBALLI DHARWAD | MERCARA | MYSURU |
|---|---|---|---|---|---|
| **FOOD :** | | | | | |
| (a) Cereals & Products | 262 | 289 | 286 | 266 | 284 |
| (b) Pulses & Products | 477 | 476 | 484 | 416 | 476 |
| (c) Oils & Fats | 256 | 291 | 224 | 279 | 243 |
| (d) Meat, Fish & Eggs | 412 | 377 | 392 | 356 | 369 |
| (e) Milk & Products | 321 | 308 | 268 | 301 | 313 |

| Group/Sub-Group/Centre | BELAGAVI | BENGALURU | HUBBALLI DHARWAD | MERCARA | MYSURU |
|---|---|---|---|---|---|
| (f) Condiments & Spices | 283 | 330 | 333 | 308 | 351 |
| (g) Vegetables & Fruits | 438 | 338 | 351 | 357 | 349 |
| (h) Other Food | 314 | 322 | 289 | 304 | 305 |
| **FOOD GROUP** | 322 | 328 | 310 | 311 | 323 |
| Pan, Supari, Tobacco & Intoxicants | 308 | 325 | 316 | 257 | 363 |
| Fuel & Light | 222 | 200 | 218 | 435 | 206 |
| Housing index | 288 | 250 | 393 | 103 | 308 |
| Clothing, Bedding & Footwear | 169 | 170 | 181 | 222 | 201 |
| Miscellaneous | | | | | |
| (a) Medical care | 247 | 272 | 224 | 267 | 214 |
| (b) Education, Recreation and Amusement | 184 | 204 | 196 | 391 | 149 |
| (c) Transport and Communication | 300 | 341 | 319 | 299 | 263 |
| (d) Personal Care & Effects | 253 | 269 | 245 | 252 | 227 |
| (e) Others | 240 | 221 | 245 | 214 | 328 |
| Miscellaneous Group | 246 | 271 | 246 | 283 | 223 |
| **GENERAL INDEX** | **286** | **283** | **294** | **287** | **283** |

**KAMLA GULERIA,**
ECONOMIC OFFICER.

**JOINT DIRECTOR,**
Directorate of Economics & Statistics,
Government of Karnataka, Bengaluru.

## DIRECTORATE OF ECONOMICS AND STATISTICS, BENGALURU-1

### Consumer Price Index Numbers for Industrial Workers

### No. DES /SIP/PWX/23/2016, Dated 07-09-2016

**State : Karnataka** **Base : 1987-88=100** **Month : July 2016**

| Group/Sub-Group | Ballari | Bhadravati | Davangere | Dandeli | Kalaburagi | Harihar | Hassan | Mandya | Mangaluru | Raichur | Tumakuru |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| **FOOD:** | | | | | | | | | | | |
| Cereals & Cereals Products | 1008 | 1019 | 1089 | 875 | 1010 | 959 | 1054 | 1121 | 855 | 1069 | 1023 |
| Pulses & PulseS Products | 1268 | 1396 | 1357 | 1432 | 1273 | 1301 | 1354 | 1283 | 1317 | 1341 | 1348 |
| Oils & Fats | 459 | 405 | 481 | 401 | 465 | 472 | 404 | 499 | 456 | 418 | 428 |
| Meat Fish & Eggs | 1076 | 1129 | 1205 | 1053 | 1267 | 1119 | 1051 | 1117 | 1085 | 1224 | 1119 |
| Milk & Milk Products | 843 | 787 | 892 | 897 | 777 | 886 | 804 | 868 | 773 | 851 | 820 |
| Condiments & Spices | 717 | 864 | 1215 | 1028 | 770 | 869 | 949 | 902 | 731 | 965 | 901 |
| Vegetables & Fruits | 1035 | 1178 | 1318 | 1137 | 868 | 1081 | 1118 | 1108 | 1010 | 824 | 1423 |
| Other Food | 671 | 1001 | 897 | 951 | 794 | 673 | **719** | 730 | 812 | 693 | 755 |
| **FOOD GROUP INDEX** | **912** | **987** | **1059** | **950** | **916** | **902** | **942** | **1014** | **878** | **956** | **970** |
| Pan, Supari, Tobacco & Intoxicants | 963 | 1080 | 1067 | 1067 | 797 | 1057 | 881 | 961 | 664 | 1149 | 1236 |
| Fuel & Light | 702 | 649 | 806 | 848 | 788 | 813 | 734 | 803 | 633 | 1057 | 579 |
| Housing | 100 | 100 | 100 | 100 | 100 | 100 | 100 | 100 | 100 | 100 | 100 |
| Clothing, Bedding & Footwear | 368 | 575 | 496 | 528 | 404 | 483 | 671 | 749 | 381 | 730 | 269 |

| Group/Sub-Group | Ballari | Bhadravati | Davangere | Dandeli | Kalaburagi | Harihar | Hassan | Mandya | Mangaluru | Raichur | Tumakuru |
|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| **MISCELLANEOUS:** | | | | | | | | | | | |
| Medical Care | 876 | 975 | 756 | 617 | 454 | 456 | 982 | 743 | 491 | 758 | 379 |
| Education, Recreation & Amusement | 1253 | 950 | 1404 | 626 | 1243 | 1413 | 1015 | 802 | 1345 | 1752 | 1673 |
| Transport & Communication | 844 | 838 | 772 | 917 | 725 | 795 | 818 | 1115 | 920 | 703 | 768 |
| Personal Care & Effects | 459 | 562 | 655 | 640 | 748 | 543 | 554 | 557 | 561 | 591 | 578 |
| Other | 774 | 583 | 769 | 993 | 515 | 543 | 571 | 750 | 442 | 709 | 511 |
| **MISCELLANEOUS GROUP INDEX** | 793 | 753 | 848 | 750 | 758 | 745 | 752 | 737 | 721 | 836 | 731 |
| **GENERAL INDEX** | **743** | **779** | **841** | **793** | **719** | **732** | **787** | **834** | **718** | **833** | **678** |
| To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

**P.R.751**

**SC. 05**

**JOINT DIRECTOR,**
Directorate of Economics & Statistics,
Government of Karnataka, Bengaluru.

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ

### ಸಂಖ್ಯೆ: ನಅಇ 100 ಬೆಮಪ್ರಾ 2016, ಬೆಂಗಳೂರು, ದಿನಾಂಕ: 12.09.2016

ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 100 ಬೆಮಪ್ರಾ 2016, ದಿನಾಂಕ: 12.08.2016 ರಲ್ಲಿನ ಅನುಸೂಚಿಯ ಖಾತೆದಾರ / ಅನುಭವದಾರನ ಹೆಸರು 2ನೇ ಕಾಲಂನಲ್ಲಿನ ಕ್ರಮ ಸಂಖ್ಯೆ: 1 ರಲ್ಲಿರುವ **"ಶಶಿಕಾಂತ ಚಂದ್ರಕಾಂತ ವೆಲಂಗಿ"** ಎಂಬುದನ್ನು **"ಶಶಿಕುಮಾರ ಚಂದ್ರಕಾಂತ ವೆಲಂಗಿ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

**PR-752**

**SC. 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

## COMMERCIAL TAXES DEPARTMENT

**Office of the Commissioner of Commercial Taxes,**

**(Karnataka), Vanijya Therige Karyalaya,**

**Gandhinagar, Kalidasa Road, Bengaluru-560 009.**

**PROCEEDINGS OF THE COMMISSIONER OF COMMERCIAL TAXES, (KARNATAKA), BENGALURU.**

**CLARIFICATION UNDER SECTION 59(4) OF THE KARNATAKA VALUE ADDED TAX ACT, 2003.**

**Present :** **RITVIK PANDEY, I.A.S.,**
Commissioner of Commercial Taxes,
(Karnataka) Bengaluru.

**Sub :** KVAT Act, 2003-Clarification under Section 59(4) regarding the rate of tax applicable in respect of certain " Devices and Parts of Solar Power Systems "- reg.

**Ref :** Application dated 28-08-2015 M/s. Sun Trop Solar Pvt Ltd., 31, 1315/A, 2$^{nd}$ Floor, 9$^{th}$ Main, RPC Layout, Vijayanagar, Bengaluru-560040 (TIN : 29241104904)

In the application cited above, M/s Sun Trop Solar Pvt Ltd., 31, 1315/A, 2$^{nd}$ Floor, 9$^{th}$ Main, RPC Layout, Vijayanagar, Bengaluru-560040 (TIN: 29. 241104904) has sought clarification regarding the rate of tax applicable on certain " Devices and Parts of Solar Power Systems".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work

of assessments and collection of revenue. It is examined and found that, the clarification requested by the petitioner is within the scope of the aforesaid provision and it is necessary that, the clarification be issued for the purpose of maintaining uniformity in the work of assessments and collection of revenue.

3. The applicant had sought an opportunity of hearing and the same was provided. Mr. Shyam Sundar, one of the Directors of the Company was present and he was heard. The applicant claims that, commodities for which clarification is sought are parts of : renewable energy devices" liable to tax @ 5.5%. The applicant also claims that "Solar PV Panels and Solar Invertors" are taxable at 4% from 1-4-2005 to 31-03-2010 and @ 5% from 01-04-2010 to 31-07-2012 and at 5.5% from 01-08-2012 to 31-07-2015 and are exampted from tax as per Notification No.: FD71 CSL 2015 dt: 01-08-2015.

4. On verification, it is noticed that the applicant has sought clarification on rate of tax on the following commodities.

1. Solar Power System for Roof Top
2. Solar System for Rural Irrigation Pump
3. Parts of Solar Systems
    - a) Solar P.V. panels
    - b) Solar Invertors
    - c) Solar Power Optimizers
    - d) Solar Charge Controllers
    - e) Solar Storage Batteries
    - f) Solar Structures and Tracking Systems.

It is notified that, above commodities others than "Solar PV Panels and Solar Invertors" for which clarification is sought are taxable at 4% from 1-04-2005 to 31-03-2010 and taxable at 5% from 1-04-2010 to 31-07-2012 and at 5.5% from 1-08-2012 and onwards. " Solar PV Panels and Solar Invertors" are taxable at 4% from 1-04-2005 to 31-03-2010 and at 5% from 1-04-2010 to 31-07-2012 and @ 5.5% from 1-08-2012 to 31-07-2015 and are exempted from levy vide Notification No: FD71 CSL 2015 dt. 01-08-2015.

5. Hence the following clarification is issued.

**CLARIFICATION NO.CLR.CR-88/15-16 DATED 08.02.2016.**

It is clarified that, "Solar PV Panels ans Solar Invertors" are taxable at 4% from 1-4-2005 to 31-03-2010 and @ 5% from 01-04-2010 to 31-07-2012 and at 5.5% from 01-08-2012 to 31-07-2015 and are exempt from tax w.e.f.01-08-2015 as per Notification No. FD 71 CSL, 2015 dated; 01-08-2015. Other commodities other than "Solar PV Panels and Solar Invertors" mentioned in Para (4) above, for which clarification is sought are taxable @ 4% form 1-4-2005 to 31-03-2010 and @ 5% from 01-04-2010 to 31-07-2012 and at 5.5% from 01-08-2012 onwards as "Renewable Energy Devices and Parts thereof" under III Schedule to KVAT Act 2003.

**PR - 756**
**SC - 25**

**RITVIK PANDEY,**
Commissioner of Commercial Taxes,
(Karnataka), Bengaluru.

## COMMERCIAL TAXES DEPARTMENT
## Office of the Commissioner of Commercial Taxes,
## (Karnataka), Vanijya Therige Karyalaya,
## Gandhinagar, Kalidasa Road, Bengaluru-560 009.
## PROCEEDINGS OF THE COMMISSIONER OF COMMERCIAL TAXES, (KARNATAKA), BENGALURU- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Present :** **RITVIK PANDEY, I.A.S.,** Commissioner of Commercial Taxes, (Karnataka) Bengaluru.

**Sub :** KVAT Act, 2003-Clarification under Section 59(4) of the Karnataka Value Added Tax Act, 2003 regarding the rate of tax applicable on "Narrow Woven Fabrics-Reg.

**Ref :** (1) Clarification No. CLR. CR.CR-214/11-12 Dated 25.06.2012

(2) Judgement of the Hon'ble High Court of Karnataka in No.STA No. 98 of 2013 Dated 22nd February 2016.

(3) Application Dated 05.12.2012.

(4) No. CLR. CR. 169/12-13 Dated 14.05.2013.

1. M/s Maltex Fashions PVt. Ltd. No. 783, 11th Cross, 4th Phase, Ganapathinagar, Peenya Industrial Area, Bengaluru (TIN 29220586838) had sought clarification on the rate of tax applicable to **'Narrow Woven Fabrics'** Vide application dated 09.02.2012.

vide clarification under reference (1), it was clarified that **'Narrow Woven Fabrics'** are liable to tax 5% as per entry 30 of Third Schedule to te Karnataka Value Added Tax Act, 2003. The applicant vide letter under reference (2), had requested for review of clarification. Vide letter under reference (4) it was informed that, his request for review of clarification cannot considered as there was no provision to review the clarification already issued.

2. Aggrieved by these proceedings, the applicant filed STA before the Hon'ble High Court of Karnataka pleading to quash the said clarification on the ground that, there were two clarifications for the very same product wherein CLR.CR.228/07-08 Dated 3rd March 2008 clarified that 'Narrow Woven Fabrics' are exempted under entry 4 of the First Schedule to the KVAT Act other than those imported which are taxable at 12.5%. Clarification under reference (1) clarified the rate of tax at 5% under entry 30 of III of KVAT Act, 2003. Honble High Court of Karnataka remanded the matter for reconsideration of the clarification and thereafter to take appropriate decision in accordance with law and restored the application dated 05.12.2012 to pass appropriate orders in accordance with law giving opportunity of hearing to the appellant .

3. As per the directions of the Hon'ble High Court of Karnataka, the applicant was given an opportunity of hearing in the matter. On 3.5.2016 Sri. Hansala Praksh Shukla Director of the applicant Company appeared for hearing and claimed that product is 'narrow woven fabric; and therefore falls within the ambit of clarification issued vide clarification dated 3rd march 2008, The applicant has also produced samples of the product manufactured by them as 'narrow woven fabric; copies of clarification dated 3.3.2008, copy of the order of the Hon'ble High Court of Karnataka, copy of he central excise tariff code of chapter 58, copies of the invoices for consideration with a request to provide them correct position of law regarding rate of tax under KVAT Act, 2003.

4. Arguments put forth by the applicant in respect of application filed for review under reference (3) is examined with reference to the facts of the case and law. In the said application, it is submitted that 'Narrow woven fabric' dealt by the applicant fall under sub-heading 20.00 of Heading 5806 of chapter 58 of Central Excise Tariff Act and as per general entry 'all varieties of fabrics' Specified in entry 4 of First Schedule to KVAT Act and only fabrics excluded from this entry and included in entry 30 w.e.f 1.4.2012 is 'HDPE and other plastic woven fabrics; The applicant has relide on clarification dated 3.3.2008 and pleads that, this clarification supports his views. The applicant pleads that, the clarification dated 25.6.2012 has not appreciated the fact that narrow woven fabrics/ narrow fabrics manufactured by them is entirely different from the plastic woven fabric both in contents and nature of the product, The applicant also pleads that as 'narrow woven fabrics' is not defined under the provisions of KVAT Act, 2003 necessarily one has to see to the meaning attributed under the provisions of central Excise Tariff Act and narrow woven fabrics manufactured by them falls under Heading 5806 which deals with narrow woven fabrics and therefore it will not fall under entry 30 of the Third Schedule. He pleads that, when specific entry override he general entry, goods in question necessarily fits into specific entry. The applicant pleads that Clarification dated 25.6.2012 is not based on correct factual matrix and has sought review of the clarification.

5. Entry 4 of the First Schedule to Karnataka Value Added Tax Act, 2003 as existed on 3.3.2008 reads as follow :

**4. All varieties of textiles and fabrics (produced or manufactured in India) including declared goods but other than those specified elsewhere third Schedule or notified by the Government.**

Entry 4 in the First Schedule to Karnataka Value Added Tax Act, 2003 as existed on 25.6.2012 reads as follow:-

**4. All varieties of textiles and fabrics but excluding those specified elsewhere in Third Schedule or notified by the Government.**

Entry 30 of the First Schedule to Karnataka Value Added Tax, Act, 2003 as existed on 25.6.2012 reads as follow:

**30. HDPE and other Plastic Woven fabrics.**

The applicant has relied on the clarification issued by this office in CLR. CR. 228/07-08 Dated 3.3.2008 which was issued prior to introduction of entry 30 in the III Schedule to KVAT Act 2003 and w.e.f. 1.4.2012 entry 4 of III Schedule is also amended which states that Textiles ans fabrics are exempted which are not specified elsewhere in the schedule or notified by the Governmet. As HDPE and other plastic woven fabrics were not specified in he III Schedule, they were exempted. From 1.4.2012 HDPE and other plastic woven fabrics were made taxable by inserting entry 30 in III Schedule to KVAT Act, 2003. This being the case, the contention of the applicant that, entry No. 4 in the I schedule is general entry where all textiles including the goods fo which clarification is sought shall be covered cannot be accepted. Further, entry No.4 I Schedule prior to the amendment in 1.4.2012 or earlier was not a general entry or specific entry. It was a 'conditional entry' for the reason that, only those textiles not specified elsewhere in III Schedule or notified by the Government were exempted not otherwise. Entry did not read as 'all Kinds of Textiles' or 'Textiles' to call it as General entry.

6. Perusal of the samples produced by the applicant shows that, the product for which the applicant has sought clarification are in respect of goods falling under HSN Code 54077400 and 60029000 respectively. The applicant has also produced tax invoices of raw materials used for the manufacture of the same. Perusal of the same reveals that, they are synthetic filament yarn of polyesters, Perusal of the purchase invoices shows that, the applicant has purchased the goods falling under HSN Code 54023300/54025200/55051090 which relate to synthetic filaments of polyesters ans manmade fibre. The applicant who was present at the time of hearimg on 10.11.2012 has also agreed that the raw materials purchased for the manufacture of the goods are polyester yarn and the finished products obtained are polyester narrow fabrics. The applicant in the relply filed pleads that, the goods for which clarification sought fall under entry 5806 but against the samples produced, the applicant has mentioned that the goods fall under Heading 5407 and 6002. Perusal of Heading 58062000 shows that, they are the goods made of elastomeric yarn. Further goods falling entry 6002 also relating to

fabrics of elastomeric or rubber thread, Thus, the raw materials used for the manufacture of these goods being synthetic material, they are naturally plastic fabrics not made of natural fibre. **Plastic** is a material consisting of wide range of synthetic or semi-synthetic organic compounds, Plastics are typically organic polymers of high molecular mass, but they often contain other substances. Thus, the Narrow Woven Fabrics falling under sub-heading 58062000, 54077400 and 60029000 are plastic woven fabrics falling 30 of III Schedule to KVAT Act, 2003 and are liable to tax at 5.5% w.e.f. 1.8.2012.

**CLARIFICATION NO.CLR/CR/214/11-12 DATED 29.08.2016.**

It is clarified that, Narrow Woven Fabrics falling under sub-heading 58062000, 54077400 and 60029000 are plastic woven fabrics falling 30 of III Schedule to KVAT Act, 2003 and are liable to tax at .5.5% w.e.f. 1.8.2012.

**PR - 757**
**SC - 25**

**RITVIK PANDEY,**
Commissioner of Commercial Taxes,
(Karnataka), Bengaluru.

## COMMERCIAL TAXES DEPARTMENT

### OFFICE OF THE COMMISSIONER OF COMMERCIAL TAXES,
### (KARNATAKA), VANIJYA THERIGE KARYALAYA,
### GANDHINAGAR, KALIDASA ROAD, BENGALURU-560 009.

### PROCEEDINGS OF THE COMMISSIONER OF COMMERCIAL TAXES, (KARNATAKA), BENGALURU CLARIFICATION UNDER SECTION 12(7) OF THE KARNATAKA TAX ON ENTRY OF GOODS ACT, 1979

**Present :** **RITVIK PANDEY, I.A.S.,** Commissioner of Commercial Taxes, (Karnataka) Bengaluru.

**Sub :** Clarification relating to liability of Entry Tax on " Electromagnetic Flow Meters"—reg

**Ref :** Application filed on 07-05-2016 of M/s Chetas Control Systems Pvt Ltd., # 80, Flat-F, 2nd Floor, Saptaswara Apartments, Ist Temple Road, 11th Cross, Malleshwaram, Bengaluru-560 003. (TIN: 29350811564)

1. In the application cited above M/s. Chetas Control Systems PVt. Ltd., #80, Flat, 2nd Floor, Saptaswara Apartment, Ist Temple Road, 11th Cross, Malleshwaram, Bengaluru-560003, (TIN: 29350811564) has sought clarification regarding the rate of tax applicable on "Electromagnetic Flow meters."

2. Section 12(7) of the Karnataka Tax on Entry of Goods Act, 1979 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assements and collection of revenue.

3. On verification it is noticed that "Electromagnetic Flow Meter" is not notified for levy of Entry Tax hence does not attract Entry Tax.

4. Hence the following clarification is issued.

**CLARFICATION NO. KTEG/CLR.CR.15/2016-17 DATED 06-08-2016.**

It is clarified that,"Electomagnetic Flow Meter" is not notified for levy of Entry Tax under Karnataka Tax on Entry of Goods Act 1976 and hence does not attract Entry Tax.

**PR - 758**
**SC - 25**

**RITVIK PANDEY,**
Commissioner of Commercial Taxes,
(Karnataka), Bengaluru.

## ಪೊಲೀಸ್ ಇಲಾಖೆ

### ಪೊಲೀಸ್ ಆಯುಕ್ತರು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ನಗರ ರವರ ನಡವಳಿಗಳು
### ಉಪಸ್ಥಿತರು:– ಎನ್ ಎಸ್. ಮೇಘರಿಖ್, ಐ.ಪಿ.ಎಸ್, ಪೊಲೀಸ್ ಆಯುಕ್ತರು, ಬೆಂಗಳೂರು ನಗರ.

**ವಿಷಯ :** ಕಾವೇರಿ ನದಿ ನೀರಿನ ಹಂಚಿಕೆ ವಿವಾದದ ಹಿನ್ನೆಲೆಯಲ್ಲಿ ಬೆಂಗಳೂರು ನಗರದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವ ದೃಷ್ಟಿಯಿಂದ ಮುನ್ನೆಚ್ಚರಿಕಾ ಕ್ರಮವಾಗಿ ಹೆಚ್ಚುವರಿ ನಿಬಂಧನೆಗಳನ್ನು ಒಳಗೊಂಡ ನಿಷೇಧಾಜ್ಞೆಯ ಜಾರಿಯನ್ನು ಅಂತ್ಯಗೊಳಿಸುವ ಬಗ್ಗೆ.

**ಉಲ್ಲೇಖ :** ಈ ಕಛೇರಿಯ ಆದೇಶ ಸಂಖ್ಯೆ :ಎಸ್‌ಬಿ/ಗುವಾ/ನಿಷೇದಾಜ್ಞೆ/20(1) ಹೆಚ್ಚುವರಿ/2016. ದಿನಾಂಕ : 12.09.2016

**ಪ್ರಸ್ತಾವನೆ :**

ಉಲ್ಲೇಖಿತ ಆದೇಶದ ಅನ್ವಯ ಕಾವೇರಿ ನದಿ ನೀರಿನ ಹಂಚಿಕೆ ವಿವಾದದ ಹಿನ್ನೆಲೆಯಲ್ಲಿ ಬೆಂಗಳೂರು ನಗರ ಪೊಲೀಸ್ ಕಮಿಷನರೇಟ್ ವ್ಯಾಪ್ತಿಯಲ್ಲಿ ಉದ್ಭವಿಸಿದ ಕಾನೂನು ಮತ್ತು ಸುವ್ಯವಸ್ಥೆಯ ಸನ್ನಿವೇಶವನ್ನು ನಿಭಾಯಿಸುವ ಸಲುವಾಗಿ ದಂಡ ಪ್ರಕ್ರಿಯಾ ಸಂಹಿತೆಯ ಕಲಂ. 144 ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆಲವು ನಿಬಂಧನೆಗಳನ್ನು ವಿಧಿಸಿ, ದಿನಾಂಕ: 12–09–2016ರಿಂದ ಮುಂದಿನ ಆದೇಶದವರೆಗೆ ಬೆಂಗಳೂರು ನಗರ

ಪೊಲೀಸ್ ಕಮಿಷನರೇಟ್ ವ್ಯಾಪ್ತಿಯ ಉತ್ತರ ವಿಭಾಗದ ಯಶವಂತಪುರ, ಮಹಾಲಕ್ಷ್ಮೀ ಲೇಔಟ್, ಪೀಣ್ಯಾ, ಆರ್.ಎಂ.ಸಿ. ಯಾರ್ಡ್, ರಾಜಗೋಪಾಲ ನಗರ, ರಾಜಾಜಿನಗರ ಹಾಗೂ ನಂದಿನಿ ಲೇಔಟ್ ಪೊಲೀಸ್ ಠಾಣೆಗಳ ಮತ್ತು ಪಶ್ಚಿಮ ವಿಭಾಗದ ರಾಜರಾಜೇಶ್ವರಿ ನಗರ, ಬ್ಯಾಟರಾಯನಪುರ, ಮಾಗಡಿ ರಸ್ತೆ, ವಿಜಯನಗರ, ಕೆಂಗೇರಿ, ಕೆ.ಪಿ. ಅಗ್ರಹಾರ, ಚಂದ್ರಲೇಔಟ್, ಜ್ಞಾನಭಾರತಿ ಹಾಗೂ ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆಗಳ ಸರಹದ್ದಿನಲ್ಲಿ ನಿಷೇದಾಜ್ಞೆಯನ್ನು ಹೊರಡಿಸಲಾಗಿತ್ತು. ಈಗ ಈ ಠಾಣೆಗಳ ವ್ಯಾಪ್ತಿಯಲ್ಲಿ ಕಾನೂನು ಮತ್ತು ಸುವ್ಯವಸ್ಥೆಯಲ್ಲಿ ಸುಧಾರಣೆ ಕಂಡು ಬಂದ ಹಿನ್ನೆಲೆಯಲ್ಲಿ ಉಲ್ಲೇಖಿತ ಆದೇಶದ ಮುಂದುವರಿಕೆಯ ಅಗತ್ಯತೆ ಇಲ್ಲವೆಂದು ನನಗೆ ಮನವರಿಕೆಯಾಗಿರುವುದರಿಂದ ಈ ಆದೇಶದ ಜಾರಿಯನ್ನು ಅಂತ್ಯಗೊಳಿಸುವುದು ಸೂಕ್ತವೆಂದು ಭಾವಿಸಿರುತ್ತೇನೆ.

**ಆದೇಶ ಸಂಖ್ಯೆ: ಎಸ್ ಬಿ/ಗು.ವಾ/ನಿಷೇದಾಜ್ಞೆ/20(1:1) ಹೆಚ್ಚುವರಿ/2016 ದಿನಾಂಕ: 14–09–2016.**

ಈ ದಿಸೆಯಲ್ಲಿ ನನಗೆ **ದಂಡ ಪ್ರಕ್ರಿಯಾ ಸಂಹಿತೆಯ ಕಲಂ 144ನೇ ಪ್ರಕರಣದ ಅನ್ವಯ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಎನ್.ಎಸ್. ಮೇಘರಿಖ್, ಐ.ಪಿ.ಎಸ್, ಪೊಲೀಸ್ ಆಯುಕ್ತರು, ಬೆಂಗಳೂರು ನಗರ,** ಆದ ನಾನು, ದಿನಾಂಕ: 12–09–2016ರಂದು ರಾತ್ರಿ 10.00 ಗಂಟೆಯಿಂದ ಮುಂದಿನ ಆದೇಶದವರೆಗೆ ಬೆಂಗಳೂರು ನಗರ ಪೊಲೀಸ್ ಕಮಿಷನರೇಟ್ ವ್ಯಾಪ್ತಿಯ ಉತ್ತರ ವಿಭಾಗದ ಯಶವಂತಪುರ, ಮಹಾಲಕ್ಷ್ಮೀ ಲೇಔಟ್, ಪೀಣ್ಯಾ, ಆರ್.ಎಂ.ಸಿ. ಯಾರ್ಡ್, ರಾಜಗೋಪಾಲನಗರ, ರಾಜಾಜಿನಗರ, ನಂದಿನಿಲೇಔಟ್ ಪೊಲೀಸ್ ಠಾಣೆಗಳು ಹಾಗೂ ಪಶ್ಚಿಮ ವಿಭಾಗದ ರಾಜರಾಜೇಶ್ವರಿ ನಗರ, ಬ್ಯಾಟರಾಯನಪುರ, ಮಾಗಡಿ ರಸ್ತೆ, ವಿಜಯನಗರ, ಕೆಂಗೇರಿ, ಕೆ.ಪಿ.ಅಗ್ರಹಾರ, ಚಂದ್ರಲೇಔಟ್, ಜ್ಞಾನಭಾರತಿ ಹಾಗೂ ಕಾಮಾಕ್ಷಿಪಾಳ್ಯ ಪೊಲೀಸ್ ಠಾಣೆಗಳ ವ್ಯಾಪ್ತಿಗಳಲ್ಲಿ ಜಾರಿಗೆ ಬರುವಂತೆ ವಿಧಿಸಿರುವ ನಿಷೇಧಾಜ್ಞೆಯನ್ನು ಈ ದಿನ ದಿನಾಂಕ:14.9.2016ರ ಬೆಳಿಗ್ಗೆ 9.00 ಗಂಟೆಯಿಂದ ಅಂತ್ಯಗೊಳಿಸಿರುತ್ತೇನೆ.

ಮೇಲ್ಕಂಡ ಆಜ್ಞೆಯನ್ನು ನನ್ನ ಸಹಿ ಮತ್ತು ನನ್ನ ಕಛೇರಿಯ ಮೊಹರಿನಲ್ಲಿ 2016ರ ಸೆಪ್ಟೆಂಬರ್ ಮಾಹೆಯ ದಿನಾಂಕ 14ರಂದು ಹೊರಡಿಸಿರುತ್ತೇನೆ.

**PR-759**

**ಎನ್.ಎಸ್. ಮೇಘರಿಖ್,**
ಪೊಲೀಸ್ ಆಯುಕ್ತರು,
ಬೆಂಗಳೂರು ನಗರ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಐ 257 ಎಸ್‌ಪಿಕ್ಯೂ 2016, ಬೆಂಗಳೂರು, ದಿನಾಂಕ: 16.11.2016.**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 4ರ ಮೇರೆಗೆ**

ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು, ಅರಬಕಟ್ಟೆ (ಅರಬಗಟ್ಟ) ಗ್ರಾಮದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳನ್ನು ಕೈಗಾರಿಕಾ ಪ್ರದೇಶಾಭಿವೃದ್ಧಿಗಾಗಿ ಭೂಸ್ವಾಧೀನಪಡಿಸಿಕೊಳ್ಳಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 1(3) ಮತ್ತು 3(1)ರಂತೆ ಅಧಿಸೂಚನೆ ಸಂಖ್ಯೆ: ಸಿಐ 211 ಎಸ್‌ಪಿಕ್ಯೂ 2009 ದಿನಾಂಕ: 14.07.2009 ರನ್ವಯ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲಾಗಿದೆ. ಸದರಿ ಅಧಿಸೂಚನೆಯು ದಿನಾಂಕ: 15.07.2009ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ.

ಮೇಲ್ಕಂಡ ಅಧಿಸೂಚನೆಯಲ್ಲಿ ಅಧಿಸೂಚಿತವಾಗಿರುವ ವಿಸ್ತೀರ್ಣದ ಜಮೀನುಗಳಿಗೆ ಕೈಗಾರಿಕೆ ಸ್ಥಾಪನೆಗಾಗಿ ಬೇಡಿಕೆ ವ್ಯಕ್ತವಾಗದ / ಬಾರದ ಕಾರಣ, ಈ ಜಮೀನುಗಳನ್ನು ಪ್ರಾಥಮಿಕ ಅಧಿಸೂಚನೆಯಿಂದ ಹೊರತುಪಡಿಸುವ ಪ್ರಸ್ತಾವನೆಗೆ ದಿನಾಂಕ: 19.09.2016ರಂದು ನಡೆದ ಸಚಿವ ಸಂಪುಟ ಸಭೆಯ ಅನುಮೋದನೆ ಪಡೆದು, ದಿನಾಂಕ: 18.10.2016ರಂದು ಆದೇಶ ಸಂಖ್ಯೆ: ಸಿಐ 37 ಎಸ್‌ಪಿಕ್ಯೂ 2015 ಅನ್ನು ಹೊರಡಿಸಲಾಗಿದೆ.

ದಾವಣಗೆರೆ ಜಿಲ್ಲೆ, ಹೊನ್ನಾಳಿ ತಾಲ್ಲೂಕು, ಅರಬಕಟ್ಟೆ (ಅರಬಗಟ್ಟ) ಗ್ರಾಮದ ಈ ಕೆಳಕಂಡ ಸರ್ವೆ ನಂಬರ್‌ಗಳ 200 ಎಕರೆ 36 ಗುಂಟೆ ವಿಸ್ತೀರ್ಣದ ಜಮೀನುಗಳನ್ನು ಮುಂದಿನ ಭೂಸ್ವಾಧೀನ ಪ್ರಕ್ರಿಯೆಗಳಿಂದ ಹೊರತುಪಡಿಸಲು 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಕಲಂ 4 ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಧಿಸೂಚನೆಯನ್ನು ಹೊರಡಿಸಲಾಗಿದೆ.

**ಅನುಸೂಚಿ**

**ಜಿಲ್ಲೆ : ದಾವಣಗೆರೆ   ತಾಲೂಕು : ಹೊನ್ನಾಳಿ   ಹೋಬಳಿ : ಹೊನ್ನಾಳಿ   ಗ್ರಾಮ : ಅರಬಗಟ್ಟ**

| ಕ್ರ. ಸಂ. | ಸರ್ವೆ ನಂ. | ವಿಸ್ತೀರ್ಣ ಎ–ಗು | ಚೆಕ್ಕುಬಂದಿ | | | |
|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| **1** | **2** | **3** | **4** | **5** | **6** | **7** |
| 1 | 101 | 28–29 | ರಸ್ತೆ | 112 | 102 | ಮಾದನಬಾವಿ ಗಡಿ |
| 2 | 102 | 28–34 | 103, ರಸ್ತೆ | 112 | 111 | 101 |
| 3 | 103 | 31–29 | 104, 105 | 102, 111 | 162 | 102 |
| 4 | 110 | 29–17 | 109, 162 | 113 | 113 | 111 |
| 5 | 111 | 30–00 | 103 | 112 | 110 | 102 |
| 6 | 112 | 37–07 | 102, 102, 111 | ಗ್ರಾಮದಗಡಿ | 113 | ಮಾದನಬಾವಿ ಗಡಿ |

| ಕ್ರ. ಸಂ. | ಸರ್ವೆ ನಂ. | ವಿಸ್ತೀರ್ಣ ಎ–ಗು | ಚೆಕ್ಕುಬಂದಿ | | | |
|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 |
| 7 | 113 | 15–00<br>0–36 ಖ<br>14–04 | 110 | ಸೂರಟಿ ಗ್ರಾಮದ ಗಡಿ | ಉಳಿಕೆ | 112 |
| ಒಟ್ಟು | | **200–36**<br>**0–36 ಖ**<br>**200–00** | | | | |

**PR. 835**

**SC. 65**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ವೆಂಕಟೇಶಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಐ 257 ಎಸ್‌ಪಿಕ್ಯೂ 2016, ಬೆಂಗಳೂರು, ದಿನಾಂಕ: 16.11.2016**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 4ರ ಮೇರೆಗೆ**

ದಾವಣಗೆರೆ ಜಿಲ್ಲೆ, ಹರಪ್ಪನಹಳ್ಳಿ ತಾಲ್ಲೂಕು, ಅನಂತನಹಳ್ಳಿ ಮತ್ತು ನಾರಾಯಣಪುರ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳನ್ನು ಕೈಗಾರಿಕಾ ಪ್ರದೇಶಾಭಿವೃದ್ಧಿಗಾಗಿ ಭೂಸ್ವಾಧೀನಪಡಿಸಿಕೊಳ್ಳಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 1(3) ಮತ್ತು 3(1)ರಂತೆ ಅಧಿಸೂಚನೆ ಸಂಖ್ಯೆ: ಸಿಐ 570 ಎಸ್‌ಪಿಕ್ಯೂ 2009 ದಿನಾಂಕ: 13.01.2010 ರನ್ವಯ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲಾಗಿದೆ. ಸದರಿ ಅಧಿಸೂಚನೆಯು ದಿನಾಂಕ: 18.01.2010ರಂದು ಕರ್ನಾಟಕ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ.

ಮೇಲ್ಕಂಡ ಅಧಿಸೂಚನೆಯಲ್ಲಿ ಅಧಿಸೂಚಿತವಾಗಿರುವ ವಿಸ್ತೀರ್ಣದ ಜಮೀನುಗಳಿಗೆ ಕೈಗಾರಿಕೆ ಸ್ಥಾಪನೆಗಾಗಿ ಬೇಡಿಕೆ ವ್ಯಕ್ತವಾಗದ / ಬಾರದ ಕಾರಣ, ಈ ಜಮೀನುಗಳನ್ನು ಪ್ರಾಥಮಿಕ ಅಧಿಸೂಚನೆಯಿಂದ ಹೊರತುಪಡಿಸುವ ಪ್ರಸ್ತಾವನೆಗೆ ದಿನಾಂಕ: 19.09.2016ರಂದು ನಡೆದ ಸಚಿವ ಸಂಪುಟ ಸಭೆಯ ಅನುಮೋದನೆ ಪಡೆದು, ದಿನಾಂಕ: 18.10.2016ರಂದು ಆದೇಶ ಸಂಖ್ಯೆ: ಸಿಐ 37 ಎಸ್‌ಪಿಕ್ಯೂ 2015 ಅನ್ನು ಹೊರಡಿಸಲಾಗಿದೆ.

ದಾವಣಗೆರೆ ಜಿಲ್ಲೆ, ಹರಪ್ಪನಹಳ್ಳಿ ತಾಲ್ಲೂಕು, ಅನಂತನಹಳ್ಳಿ ಮತ್ತು ನಾರಾಯಣಪುರ ಗ್ರಾಮಗಳ ಈ ಕೆಳಕಂಡ ಸರ್ವೆ ನಂಬರ್‌ಗಳ 200 ಎಕರೆ ವಿಸ್ತೀರ್ಣದ ಜಮೀನುಗಳನ್ನು ಮುಂದಿನ ಭೂಸ್ವಾಧೀನ ಪ್ರಕ್ರಿಯೆಗಳಿಂದ ಹೊರತುಪಡಿಸಲು 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಕಲಂ 4 ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಧಿಸೂಚನೆಯನ್ನು ಹೊರಡಿಸಲಾಗಿದೆ.

**ಅನುಸೂಚಿ**

**ಜಿಲ್ಲೆ: ದಾವಣಗೆರೆ** **ತಾಲೂಕು: ಹರಪನಹಳ್ಳಿ** **ಹೋಬಳಿ: ಕಸಬಾ** **ಗ್ರಾಮ:ಅನಂತನಹಳ್ಳಿ**

| ಅ. ನಂ | ರಿ. ಸರ್ವೆ ನಂಬರ್ | ವಿಸ್ತೀರ್ಣ ಎ–ಸೆಂ | ಚಕಬಂದಿ (ಚತುಃಸಿಮೆ) | | | |
|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | 2 | 3 | 4 | 5 | 6 | 7 |
| 1 | 22/1 | 4–83 | 22/23 | 21 | ಮಲ್ಲಿಕಟ್ಟೆಗಡಿ | 23, 24 |
| 2 | 22/2 | 2–77 | 22/3 | 22/1 | ಮಲ್ಲಿಕಟ್ಟೆಗಡಿ | 24 |
| 3 | 22/3 | 2–50 | 25 | 22/2 | 25 | 22 |
| 4 | 25 | 10–90 | 24 | 22 | ನಾರಾಯಣಪುರಗಡಿ | 24 |
| 5 | 26/1 | 0–50 | 27 | 26/2 | ನಾರಾಯಣಪುರಗಡಿ | 31 |
| 6 | 26/2 | 9–64 | 26/1 | 25 | ನಾರಾಯಣಪುರಗಡಿ | 31, 32 |
| 7 | 27 | 2–41 | 23 | 24 | ನಾರಾಯಣಪುರಗಡಿ | ರಸ್ತೆ |
| 8 | 28/1 | 0–28 | 29 | 28/2 | ನಾರಾಯಣಪುರಗಡಿ | ರಸ್ತೆ |
| 9 | 28/2 | 4–31 | 28/1 | 28/3 | ನಾರಾಯಣಪುರಗಡಿ | **30, 9** |
| 10 | 28/3 | 0–30 | 28/2 | 27 | ನಾರಾಯಣಪುರಗಡಿ | **30** |
| ಒಟ್ಟು | | **38–44** | | | | |

